# ಪಂಚಮ

ಸಂಪುಟ : 1 ಶನಿವಾರ 5-2-1977 ಬೆಲೆ 20 ಪೈಸೆ ಸಂಚಿಕೆ : 9


ಕೊಲೆಗಾರರಿಗೆ ಶಿಕ್ಷೆ ಆಗುವುದೆ ?

## ಚಿಂತಾಮಣಿ ಹತ್ತಿರ ಹರಿಜನ ಮಹಿಳೆಯ ಭೀಕರ ಕೊಲೆ

(ವರದಿ : ನಮ್ಮ ಪ್ರತಿನಿಧಿಯಿಂದ)

ಕೋಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕು ಕೈವಾರ ಹೋಬಳಿ ದೊಡ್ಡಿಪಲ್ಲಿ ಗ್ರಾಮದಲ್ಲಿ ಕಳೆದ ಜನವರಿ ತಿಂಗಳು ಹರಿಜನ ಮಹಿಳೆಯ ಭೀಕರ ಕೊಲೆಯಾಗಿರುವ ಧಾರುಣ ವಾರ್ತೆಯೊಂದು ವರದಿಯಾಗಿದೆ. ಈ ಕೊಲೆಯನ್ನು ಮುಚ್ಚುವ ಪ್ರಯತ್ನ ನಡೆದಿದ್ದು ಮೃತಳ ತಂದೆ ತಾಯಿಗಳು ಬಡ ಹರಿಜನ ಕುಟುಂಬಕ್ಕೆ ಸೇರಿದವರಾಗಿದ್ದು ಅಸಹಾಯಕರಾಗಿರುವರು.

ಕೊಲೆಯಾದ ಮಹಿಳೆಯ ಹೆಸರು ಚಿನ್ನಮ್ಮ. ವಯಸ್ಸು ಇಪ್ಪತ್ತೆರಡು. ಈಕೆ ಗಂಡನನ್ನು ಬಿಟ್ಟು ಬಂದು ತನ್ನ ತಾಯಿ ಊರಲ್ಲೆ ವಾಸವಾಗಿದ್ದಳು. ಈ ಚಿನ್ನಮ್ಮನೊಡನೆ ಕನ್ನಂಪಲ್ಲಿ ಗ್ರಾಮದ ರಾಮರೆಡ್ಡಿ ಬಿನ್ ಕೊಡಿಪಲ್ಲಿ ಮುನಿವೆಂಕಟಪ್ಪ ಐದಾರು ವರ್ಷಗಳಿಂದ ಸಂಬಂಧ ಇಟ್ಟುಕೊಂಡಿದ್ದನೆಂದೂ, ಇತ್ತೀಚೆಗೆ ಪಿಲ್ಲ ಮುನೆಪ್ಪ ಬಿನ್ ಕೊಟೂರು ರಾಮನ್ನನೂ ಚಿನ್ನಮ್ಮನೊಡನೆ ಸಂಬಂಧ ಇಟ್ಟುಕೊಂಡಿದ್ದನೆಂದೂ, ಈ ಕಾರಣಕ್ಕಾಗಿ ರಾಮರೆಡ್ಡಿ ಮತ್ತು ಪಿಲ್ಲ ಮುನೆಪ್ಪರ ನಡುವೆ ಮನಸ್ತಾಪ ಬೆಳೆದು ದಿನಾಂಕ 12-1-77 ರಂದು ಹೊಡೆದಾಟವಾಯಿತೆಂದೂ, ಈ ಹೊಡೆದಾಟವನ್ನು ರಾಜಿ ಮಾಡುವ ಸಲುವಾಗಿ ಅದೇ ದಿನ ರಾತ್ರಿ 10 ಗಂಟೆ ಸಮಯದಲ್ಲಿ ದೊಡ್ಡಿಪಲ್ಲಿ ಗ್ರಾಮದಲ್ಲಿ ಪಂಚಾಯಿತಿ ಮೃತಳಾದ ಮಿಲ್ಟ್ರಿ ವೆಂಕಟಪ್ಪರೆಡ್ಡಿ, ಕೌನ್ಸಿಲರ್, ಚಿಂತಾಮಣಿ ಈತನ ಮುಖಂಡತ್ವದಲ್ಲಿ ಪಂಚಾಯ್ತಿ ನಡೆಯಿತೆಂದೂ ತಿಳಿದು ಬಂದಿದೆ. ಈ ಪಂಚಾಯ್ತಿ ಸ್ಥಳಕ್ಕೆ ಮೃತಳಾದ ಚಿನ್ನಮ್ಮ ಮತ್ತು ಚಿನ್ನಮ್ಮನತಾಯಿ ಸೀತಮ್ಮನನ್ನು ಕರೆಸಿ ಸೇರಿದ್ದ ಯಜಮಾನರು ವಿಚಾರಣೆ ಮಾಡಿರುವರು. ಮೃತಳ ತಾಯಿ ಸೀತಮ್ಮನ ಹೇಳಿಕೆಯ ಪ್ರಕಾರ-ಆ ಪಂಚಾಯ್ತಿಯ ಮುಖ್ಯಸ್ಥ ಮಿಲ್ಟ್ರಿ ವೆಂಕಟ ರೆಡ್ಡಿಯು ಸೀತಮ್ಮನನ್ನು ಕುರಿತು, ಈ ಜಗಳಕ್ಕೆಲ್ಲ ನಿನ್ನ ಮಗಳು ಚಿನ್ನಮ್ಮನೇ ಕಾರಣವಲ್ಲವೇನೆ? ಎಂದು ಕೇಳಿ ಪಂಚಾಯ್ತಿದಾರರೊಡನೆ ಮಾತಾಡಿ ರಾಮರೆಡ್ಡಿ ಮತ್ತು ಪಿಲ್ಲಮುನೆಪ್ಪನನ್ನು ರಾಜಿಮಾಡಿಸಿ ತದನಂತರ ಸೀತಮ್ಮ ಮತ್ತು ಚಿನ್ನಮ್ಮನನ್ನು ಅಲ್ಲಿ ಸೇರಿದ್ದವರೆಲ್ಲಾ ಹೀನಾಮಾನವಾಗಿ ಬೈದಿರುವರು. ಆಮೇಲೆ ಮಿಲ್ಟ್ರಿ ವೆಂಕಟ ರೆಡ್ಡಿಯು ಸೀತಮ್ಮ ಮತ್ತು ಚಿನ್ನಮ್ಮನವರನ್ನು ಕುರಿತು ಒಂದು ವಾರದೊಳಗೆ ನೀವು ಊರುಬಿಟ್ಟು ಹೋಗಬೇಕೆಂದೂ ಇಲ್ಲದಿದ್ದರೆ ತಲೆ ಬೋಳಿಸಿ ಕತ್ತೆ ಮೇಲೆ ಮೆರವಣಿಗೆ ಮಾಡಲಾಗುವುದೆಂದೂ, ಹಾಗೂ ಊರು ಬಿಡದಿದ್ದರೆ ಚಿನ್ನಮ್ಮನ ಕೊಲೆ ಮಾಡಲಾಗುವುದೆಂದೂ, ಸಾವಿರಾರು ಖರ್ಚುಮಾಡಿ ಪೋಲೀಸ್ ಕೇಸು ಗೆದ್ದು ಬರುವೆನೆಂದೂ ಮಿಲ್ಟ್ರಿ ವೆಂಕಟರೆಡ್ಡಿಯು ಪಂಚಾಯ್ತಿ ಪರವಾಗಿ ತೀರ್ಪು ಇತ್ತನೆಂದು ಮೃತಳ ತಾಯಿ ತಿಳಿಸಿರುವರು.

ಇದಾದ ಮೇಲೆ ದಿನಾಂಕ 21-1-77 ರಂದು ಸಂಜೆ ಮೃತಳ ತಾಯಿ ಸೀತಮ್ಮನು ಪಿಲ್ಲಮುನೆಪ್ಪನ ಹತ್ತಿರ ತಮಗೆ ಬರಬೇಕಾದ ಬಾಕಿ ಕೂಲಿಯನ್ನು ಕೇಳಲಾಗಿ ಆತ 'ನಿನ್ನ ಮಗಳನ್ನು ಕಳಿಸು ಕೊಡುವೆ' ಎಂದನೆಂದೂ, ಈ ಮಾತನ್ನು ನಂಬಿ ಪಿಲ್ಲಮುನೆಪ್ಪನ ಮನೆಗೆ ಕೂಲಿ ಪಡೆದು ಬರಲು ಚಿನ್ನಮ್ಮ ಹೋದಳೆಂದೂ ಮತ್ತೆ ಬರಲಿಲ್ಲವೆಂದೂ ಶ್ರೀಮತಿ ಸೀತಮ್ಮ ತಿಳಿಸಿರುವರು. ತನ್ನ ಮಗಳು ಬಹಳ ಹೊತ್ತಾದರೂ

[ ಆರನೆಯ ಪುಟಕ್ಕೆ ]

## ಕಾಂಗ್ರೆಸ್ ಪಕ್ಷದ ಮೂವತ್ತು ವರ್ಷ ರಾಜಕೀಯದಲ್ಲಿ

ಭಾರತದ ಹರಿಜನ ಗಿರಿಜನರನ್ನು ಅಖಂಡವಾಗಿ ಪ್ರತಿನಿಧಿಸುತ್ತಿದ್ದ ಕೃಷಿಸಚಿವ ಜಗಜೀವನರಾಂರವರು ತಮ್ಮ ಮಂತ್ರಿ ಪಧವಿಗೂ ಕಾಂಗ್ರೆಸ್ ಪಕ್ಷಕ್ಕೂ ರಾಜೀನಾಮೆ ಇತ್ತು ಬೆರಗುಗೊಳಿಸಿದ್ದಾರೆ. ಇದು ಕಾಂಗ್ರೆಸ್ ಪಕ್ಷಕ್ಕೆ ದೊಡ್ಡ ಹೊಡೆತವಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ದೇಶದಲ್ಲಿ ನಿರ್ಣಾಯಕ ಮತದಾರರಾಗಿರುವ ಹರಿಜನ ಗಿರಿಜನರ ಮೇಲೆ ಜಗಜೀವನರಾಂರವರ ಪ್ರಭಾವ ಇರುವುದರಿಂದ ದಟ್ಟವಾಗಿ ಹರಿಜನ ಗಿರಿಜನರಿಗೆ ಕಾಂಗ್ರೆಸ್‌ನೊಡನೆ ಮೊದಲು ಇದ್ದ ಒಂದು ಬಗೆಯ ನೆಂಟು ಈಗ ತಪ್ಪಿದಂತಾಗಿದೆ. ಹರಿಗಿರಿಜನ ಮುಖಂಡರು ಸಾಮಾನ್ಯವಾಗಿ ಮೇಲಿನ ಅಧಿಕಾರಕ್ಕೆ ಹೌದಪ್ಪಗಳಾಗಿರುವುದರಿಂದ ಜಗಜೀವನರಾಮ್‌ರವರ ಕೃತ್ಯ ಇಡೀ ಹರಿಜನ ಗಿರಿಜನ ಸಮುದಾಯಕ್ಕೆ ಗೌರವ-ಘನತೆ ಸ್ವಾಭಿಮಾನ ತರಿಸಿಕೊಡುವಂತಹದು ಎಂದು ನಿಮ್ನವರ್ಗ ಜಾತಿಯ ತರುಣರು ಪ್ರಮುಖರು ಭಾವಿಸಿರುವರು. ಕೆಲವು ಹೌದಪ್ಪ ಹರಿಜನ ನಾಯಕರು ಅಧಿಕಾರ ಆಸೆಗಾಗಿ ಒಂದಿಷ್ಟು ತಲೆಕುಣಿಸಿದರೂ ಪರಿಣಾಮ ಬೀರದಂತ ಜಗಜೀವನರಾವ್‌ರವರ ಪ್ರಭಾವವಿದೆ. ಜೊತೆಗೆ ಕಾಂಗ್ರೆಸ್‌ನಲ್ಲಿದ್ದ ಎಡಪಂಥೀಯರೆಲ್ಲ ಕಾಂಗ್ರೆಸ್ ಪಕ್ಷದ ಅಧಿಕಾರಿ ಕೇಂದ್ರೀಕರಣ, ಫ್ಯಾಸಿಸ್ಟ್ ಧೋರಣೆಗಳನ್ನು ವಿರೋಧಿಸಿ ಹೊರಬರುವುದರಿಂದ ಜಗಜೀವನರಾಮ್‌ರವರಿಗೆ ಹೆಚ್ಚು ಬೆಂಬಲ ಸಿಕ್ಕಿದಂತಾಗಿದೆ. ಈಗ ದೇಶದ ಹರಿಜನ-ಗಿರಿಜನರೆಲ್ಲ ಹೊಸಬಗೆಯಲ್ಲಿ ಯೋಚಿಸುವಂತೆ ಪರಿಸ್ಥಿತಿ ಒತ್ತಾಯಿಸುತ್ತಿದೆ.

# ಎಲ್ಲ ಅನ್ಯಾಯಗಳ ವಿರುದ್ಧ ಸಂಘಟಿತ ಹೋರಾಟ

(ವರದಿ : ನಮ್ಮ ಪ್ರತಿನಿಧಿಯಿಂದ)

ಸಾವಿರಾರು ವರ್ಷಗಳಿಂದ ಮೂಕಪಶುಗಳಾಗಿ ಗುತ್ತೇದಾರಿ, ಬಂಡವಾಳಶಾಹಿ ಹಾಗೂ ಪುರೋಹಿತಶಾಹಿಯ ಕ್ರೂರ ದಬ್ಬಾಳಿಕೆಗೆ ಒಳಗಾಗಿದ್ದ ದಲಿತರು ಈಗೀಗ ದಬ್ಬಾಳಿಕೆಯ ವಿರುದ್ಧ ಸಿಡಿದು ನಿಲ್ಲಲು ಅಲ್ಲಲ್ಲೇ ಅಣಿಯಾಗುತ್ತಿದ್ದಾರೆ. ಈ ರೀತಿಯ ಪ್ರತಿಭಟನಾ ಶಕ್ತಿಗಳನ್ನು ಒಗ್ಗೂಡಿಸಿ ಒಂದು ಸಂಘಟನಾ ಶಕ್ತಿ ಮಾಡಲು ಅಖಿಲ ಕರ್ನಾಟಕ ಲೇಖಕ ಮತ್ತು ಕಲಾವಿದರ ಒಕ್ಕೂಟದ ಪ್ರಥಮ ಸಮ್ಮೇಳನ ತಾ|| 18 ಮತ್ತು 19ನೆ ಡಿಸೆಂಬರ್‌ನಲ್ಲಿ ಭದ್ರಾವತಿಯಲ್ಲಿ ಸೇರಿತ್ತು. ದಲಿತರ ನೋವನ್ನು ಪ್ರಾಮಾಣಿಕವಾಗಿ ಪ್ರತಿನಿಧಿಸ ಹೊರಟ ಈ ಸಂಘಟನೆಯಲ್ಲಿ ಕರ್ನಾಟಕದ ಎಲ್ಲಾ ಪ್ರದೇಶಗಳ ದಲಿತ ಲೇಖಕ–ಕಲಾವಿದರು ಭಾಗವಹಿಸಿದ್ದರು.

ಎರಡು ದಿನಗಳ ಈ ಸಂಟಘನಾ ಸಭೆಯನ್ನು ಮಾಜಿ ಪೌರಾಡಳಿತ ಸಚಿವರಾದ ಶ್ರೀ ಬಿ. ಬಸವಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಶ್ರೀ ವಿ. ಟಿ. ರಾಜಶೇಜರಶೆಟ್ಟಿಯವರು ಉದ್ಘಾಟಿಸಿದರು. "ದಲಿತರು ಎಚ್ಚೆತ್ತು ತಮ್ಮ ಪ್ರಗತಿಗಾಗಿ ಹೋರಾಡಬೇಕು. ಅಗತ್ಯವಾದಲ್ಲಿ ಪ್ರಾಣ ತ್ಯಾಗಕ್ಕೂ ಸಿದ್ಧರಾಗಬೇಕು. ಮೇಲಿನ ವರ್ಗದವರ ಮನರಂಜನೆಗಾಗಿ ಮತ್ತು ಅವರ ಹಿತಕ್ಕಾಗಿ ಸೃಷ್ಟಿಯಾಗಿರುವ ಹಳೆಯ ಸಾಹಿತ್ಯವನ್ನು ತಿರಸ್ಕರಿಸಬೇಕು. ಎಲ್ಲ ಬಗೆಯ ಅನ್ಯಾಯಗಳ ವಿರುದ್ಧ ಜೀವದ ಹಂಗು ತೊರೆದು ಹೋರಾಡಬೇಕು" ಎಂದು ಶ್ರೀ ಬಸವಲಿಂಗಪ್ಪನವರು ಹೇಳಿದರು.

ಸಮ್ಮೇಳನ ಉದ್ಘಾಟಿಸಿದ ಶ್ರೀ ರಾಜಶೇಖರಶೆಟ್ಟಿಯವರು "ಮೇಲು ವರ್ಗದವರೆಂದು ಹೇಳಿಕೊಳ್ಳುವ ಜನರ ಸಂಕುಚಿತ ದೃಷ್ಟಿ ಮತ್ತು ಪತ್ರಿಕೆಗಳ ಅಸಹಕಾರ ಜನರಲ್ಲಿ ಪ್ರಗತಿಪರ ಚಿಂತನೆ ಬೆಳೆಯದಿರಲು ಕಾರಣ ಎಂದು ಹೇಳಿ "ದಲಿತರೆ ಬಹು ಸಂಖ್ಯಾತರಾಗಿರುವ ಈ ದೇಶ ದಲಿತರಿಗೇ ಸೇರಿದ್ದು, ಅದನ್ನು ಆಳುವ ಹಕ್ಕು ಅವರಿಗೇ ಸೇರಿದ್ದು, ದಲಿತರಿಂದಲೇ ದಲಿತರ ಉದ್ಧಾರ ಸಾಧ್ಯ. ಮೇಲು ವರ್ಗದವರೆಂದು ಹೇಳಿಕೊಳ್ಳುವ ಜನ ದಲಿತರನ್ನು ಶೋಷಿಸುವವರೇ ಹೊರತು ಅವರಿಂದ ದಲಿತರ ಉದ್ಧಾರ ಎಂದಿಗೂ ಆಗದು. ಇದು ಐತಿಹಾಸಿಕ ಸತ್ಯ. ದಲಿತರು ಇತಿಹಾಸದಿಂದ ಈ ಪಾಠವನ್ನು ಇನ್ನೂ ಕಲಿಯದಿರುವುದು ವಿಷಾದಕರ" ಎಂದು ನೆರೆದಿದ್ದ ಸಾವಿರಾರು ದಲಿತರನ್ನುದ್ದೇಶಿಸಿ ಮಾತನಾಡಿದರು. ಮೊದಲನೇ ದಿನದ ಎರಡನೇ ಕಾರ್ಯಕ್ರಮವಾಗಿ 'ವಿಚಾರ ಸಂಕಿರಣ' ಶ್ರೀ ದೇವನೂರ ಮಹಾದೇವ ಅವರ ಅಧ್ಯಕ್ಷತೆಯಲ್ಲಿ ಮಧ್ಯಾಹ್ನ ಪ್ರಾರಂಭವಾಯಿತು.

ಉರಿವ ಬಿಸಿಲನ್ನು ಲೆಕ್ಕಿಸದೆ ದಲಿತರು ದೂರ ದೂರುಗಳಿಂದ ಬಂದು ವಿಚಾರ ಸಂಕಿರಣದಲ್ಲಿ ಹಾಜರಿದ್ದರು. ದಲಿತರ ಎಲ್ಲಾ ರೀತಿಯ ಸಮಸ್ಯೆಗಳನ್ನು ಚರ್ಚಿಸಿದ ಈ ವಿಚಾರ ಸಂಕಿರಣದಲ್ಲಿ ದಲಿತರ ನೋವಿನ ಪ್ರಾಮಾಣಿಕ ಪ್ರತೀಕಗಳಾಗಿ ಶ್ರೀ ಬಿ. ಕೃಷ್ಣಪ್ಪ, ಶ್ರೀ ಶಿವಾಜಿ ಗಣೇಶನ್, ಶ್ರೀ ಸಿದ್ಧಲಿಂಗಯ್ಯ, ಶ್ರೀ ಇಂದೂಧರ ಹೊನ್ನಾಪುರ ಮತ್ತು ಶ್ರೀಧರ ಕಲಿವೀರ ಮಾತನಾಡಿದರು.

'ದಲಿತರು ಮತ್ತು ಸಂಘಟನೆ' ಎಂಬ ವಿಷಯವಾಗಿ ಮಾತನಾಡಿದ ಶ್ರೀ ಬಿ. ಕೃಷ್ಣಪ್ಪನವರು 'ದಲಿತರ ಉದ್ಧಾರ ದಲಿತರಿಂದಲೇ ಸಾಧ್ಯ' ಎನ್ನುವ ಮಾತನ್ನು ಒತ್ತಿ ಹೇಳಿದರಲ್ಲದೆ, ಇಲ್ಲಿಯವರೆಗೂ ದಲಿತರಿಗೆ ಎಲ್ಲೂ ಪ್ರಾತಿನಿಧ್ಯ ಸಿಕ್ಕಿಲ್ಲ. ಸಿಕ್ಕಿರುವ ಕೆಲವೇ ದಲಿತ ನಾಯಕರೂ ತಮ್ಮವರನ್ನು ಮರೆತು ಪ್ರತಿಷ್ಠಿತ ವರ್ಗದ ಹಿತಾಸಕ್ತಿಯಲ್ಲಿಯೇ ತೊಡಗಿದ್ದಾರೆ" ಎಂದು ಹೇಳಿ ಈ ದುರಂತದಬಗ್ಗೆ ವಿಷಾದ ವ್ಯಕ್ತಪಡಿಸಿದರು. ಇದಕ್ಕಾಗಿ ನಿಷ್ಠಾವಂತ ದಲಿತ ಯುವಸಂಘಟನೆಯ ಅಗತ್ಯ ಬಹಳವಾಗಿದೆ ಎಂದರು.

**ಪತ್ರಿಕೆಗಳಿಂದ ಅನ್ಯಾಯ**

'ಪತ್ರಿಕೆಗಳು ಮತ್ತು ದಲಿತರು' ಎಂಬ ವಿಷಯವಾಗಿ ಮಾತನಾಡಿದ ಶ್ರೀ ಶಿವಾಜಿ ಗಣೇಶನ್ "ದಿನ ನಿತ್ಯ ದಲಿತರ ಮೇಲೆ ನಡೆಯುತ್ತಿರುವ ದಬ್ಬಾಳಿಕೆ, ಕೊಲೆ, ಸುಲಿಗೆ ಇತ್ಯಾದಿಗಳನ್ನು ಯಾವುದೇ ರಾಜ್ಯ ಅಥವಾ ರಾಷ್ಟ್ರಮಟ್ಟದ ಪತ್ರಿಕೆಗಳು ಬೆಳಕಿಗೆ ತರುತ್ತಲೇ ಇಲ್ಲ. ಹೀಗಾಗಿ ದಲಿತರಿಗೆ ನ್ಯಾಯವೇ ಇಲ್ಲದಂತಾಗಿದೆ" ಎಂದು ಹೇಳಿ "ಕೆಲವು ದಲಿತರ ಹೆಸರಿನ ಮುಖವಾಡ ಹಾಕಿದ ಪತ್ರಿಕೆಗಳು ಕೆಟ್ಟ ರಾಜಕೀಯ ಹಿತಾಸಕ್ತಿ ವಹಿಸಿ ಅವೂ ಕೂಡ ದಲಿತರಿಗೆ ಮೋಸಮಾಡುತ್ತಿವೆ" ಎಂದರು. ಈ ದಿಕ್ಕಿನಲ್ಲಿ ದಲಿತ ಸಮಸ್ಯೆಗಳಿಗೇ ಮೀಸಲಾದ ಪಂಚಮ ಪತ್ರಿಕೆಯನ್ನು ಉಳಿಸಿ ಬೆಳೆಸಬೇಕೆಂದು ಒತ್ತಿ ಹೇಳಿದರು.

**ದಲಿತ ಕವಿ ಯಾರು ?**

"ದಲಿತರ ಮೇಲೆ ಪರಂಪರಾನುಗತವಾದ ಬೌದ್ಧಿಕ ದಬ್ಬಾಳಿಕೆ ನಡೆದಿದೆ". "ದಲಿತರು ಮತ್ತು ಅಭಿವ್ಯಕ್ತಿ" ಬಗ್ಗೆ ಮಾತಾಡಿದ ಶ್ರೀ ಸಿದ್ಧಲಿಂಗಯ್ಯನವರು ಹೇಳಿದ ಮಾತಿದು. "ಜಾನಪದ ಸಾಹಿತ್ಯ ಮತ್ತು ಕಲೆಗಳಲ್ಲಿ ಕಾಣಬರುವ ದಲಿತರ ಜೀವನ ಇದ್ದುದರಲ್ಲೇ ವಿಜೃಂಭಿಸುತ್ತದೆ. ಆದರೆ ಅಪರೂಪವಾಗಿ ಅಪಸ್ವರದಲ್ಲಿ ಬಂದಿರುವ ದಲಿತರ ನೋವುಗಳೇ ನಿಜವಾದ ಅಭಿವ್ಯಕ್ತಿಗಳು" ಎಂದು ಹೇಳಿದರು. "ತನ್ನ ಜನರೊಡನೆ ಭಾವನಾತ್ಮಕ ಹಾಗೂ ಬೌದ್ಧಿಕ ಸಂಬಂಧವುಳ್ಳವನೇ ನಿಜವಾದ ದಲಿತ ಕವಿ. ಇವೆರಡನ್ನೂ ಹೊಂದದವನಾದರೆ ಅವನು ಇಪ್ಪಂತಂಶದ ಕವಿಯಾಗಿ ಮುಗಿದು ಹೋಗಬಹುದು" ಎಂದು ಎಚ್ಚರಿಸಿದರು.

"ಸಂಪರ್ಕ ಮಾಧ್ಯಮ ಮತ್ತು ದಲಿತರು" ವಿಷಯದ ಬಗ್ಗೆ ಮಾತನಾಡುತ್ತ ಶ್ರೀ ಇಂದೂಧರ ಹೊನ್ನಾಪುರ ಅವರು, "ಸಂಪರ್ಕ ಮಾಧ್ಯಮದಲ್ಲಿ ದಲಿತರಿಗೆ ಅನ್ಯಾಯವಾಗುತ್ತಿದೆ. ಅದರಲ್ಲೂ ಬಹಳ ಪ್ರಭಾವಶಾಲಿಯಾದ ಚಿತ್ರರಂಗದಲ್ಲಿಯಂತೂ ಇದು ಅತಿಯಾಗಿದೆ. ದಲಿತರನ್ನು ಈ ವ್ಯವಸ್ಥೆಯೊಟ್ಟಿಗೆ ಸೇರಿಸಿ ಅವರನ್ನು ಷಂಡರನ್ನಾಗಿಸುವಲ್ಲಿ ಈ ಮಾಧ್ಯಮ ಪ್ರಚೋದಿಸುತ್ತಿದೆ. ಇದು ದೊಡ್ಡ ದುರಂತ" ಎಂದರು. ಮುಂದುವರೆದು ಮಾತನಾಡುತ್ತ ಅವರು "ಯಾವುದೇ ಅಭಿವ್ಯಕ್ತಿ ಮಾಧ್ಯಮದಲ್ಲೂ ದಲಿತರಿಗೆ ಪ್ರಾತಿನಿಧ್ಯವಿಲ್ಲ. ಪ್ರಾತಿನಿಧ್ಯ ಪಡೆದ ಕೆಲವೇ ದಲಿತರೂ ತಮ್ಮ ನಿಜ ಸ್ಥಿತಿಯನ್ನು ಮರೆತು ಆಳುವ ವರ್ಗದ ಶಂಖವಾಗಿದ್ದಾರೆ. ಇದು ದಲಿತೇತರರು ಮಾಡುವ ಮೋಸಕ್ಕಿಂತಲೂ ದೊಡ್ಡದು" ಎಂದು ಉದಾಹರಣೆ ಸಹಿತ ಹೇಳಿದರು.

"ದಲಿತರು ನೋವಿನ ಪೆಟ್ಟಿಗೆ ಒಂದಾಗುತ್ತಾರೆ. ಹೀಗೆ ಒಂದಾಗುವಿಕೆಯೇ ಕ್ರಾಂತಿ ತರುವ ಸಂಘಟನೆಯಾಗಬೇಕು. ಸಾಹಿತ್ಯ, ನಾಟಕ, ಕಲೆ ಇದಕ್ಕೆ ಒತ್ತುಗಳಾಗಿ ಇರುವುದಷ್ಟೇ ಕೆಲಸವಾಗುವುದು. ದಲಿತರು ಸಮತಾವಾದ ಸ್ಥಾಪಿಸಲು ನೆರವಾಗುತ್ತದೆ" ಶ್ರೀಧರ ಕಲಿ

(ಮುಂದಿನ ಪುಟಕ್ಕೆ)

# ದಲಿತ ಲೇಖಕ ಕಲಾವಿದ ಮತ್ತು ಯುವ ಸಂಘಟನೆ

ವೀರ ಅವರು ಹೇಳಿದ ಮಾತಿದು. ಅವರು ದಲಿತರು ಮತ್ತು ಕ್ರಾಂತಿ" ಎಂಬ ವಿಷಯದ ಬಗ್ಗೆ ಮಾತನಾಡುತ್ತಿದ್ದರು ಫ್ಯಾಸಿಸ್ಟರು. ಬಿರ್ಲಾಗಳ ವ್ಯವಸ್ಥೆ ವಿರುದ್ಧ ದನಿ ಎದ್ದೆದ್ದು ಒಟ್ಟಾಗಬೇಕಾಗಿದೆ. ದಲಿತರಲ್ಲಿರುವ ಪ್ರತಿಷ್ಠಿತ ವರ್ಗ ಮಾಡುತ್ತಿರುವ ಸ್ವಂತ ದ್ರೋಹವನ್ನು ಬಿಡಬೇಕು. ಹಳ್ಳಿಗಳಲ್ಲಿರುವ ಅಣ್ಣ ತಂಗಿಯರನ್ನು ಕ್ರಾಂತಿಗೆ ಅಣಿಗೊಳಿಸುವುದು ಎಲ್ಲರ ಕರ್ತವ್ಯ ಎಂದು ಅವರು ಹೇಳಿದರು.

**ಕಣ್ತೆರೆಸುವ ಕೆಲಸ : ಮೊದಲ ಹೆಜ್ಜೆ**

ವಿಚಾರ ಸಂಕಿರಣದ ಅಧ್ಯಕ್ಷತೆ ವಹಿಸಿದ್ದ ಶ್ರೀ ದೇವನೂರ ಮಹಾದೇವ ಅವರು 'ದಲಿತರಲ್ಲಿ ವಿಚಾರಕ್ರಾಂತಿಯಾಗಬೇಕು' ಎಂದು ಹೇಳಿ "ಇದೇನು? ಇದು ಯಾಕೆ? ಎಂದು ಮನುಷ್ಯ ತನ್ನ ಸುತ್ತಮುತ್ತನ್ನು ನೋಡಿ ಕೇಳಿದಾಗ ಅವನು ವಿಚಾರವಂತನಾಗುತ್ತಾನೆ. ವಿಚಾರ ಅವನ ತಲೇಲಿ ಹುಟ್ಟುವುದಕ್ಕೂ ಮೊದಲು ಅವನು ಪ್ರಜ್ಞಾಪೂರ್ವಕವಾಗಿ ತನ್ನ ಸುತ್ತಮುತ್ತನ್ನು ನೋಡಬೇಕಾಗುತ್ತದೆ. ದೇಶದಲ್ಲಿರುವ 12 ಕೋಟಿಗೂ ಹೆಚ್ಚಿರುವ ದಲಿತರು ಪ್ರಜ್ಞಾಪೂರ್ವಕವಾಗಿ ತಮ್ಮ ಸುತ್ತಮುತ್ತನ್ನು ನೋಡುವುದಾದರೆ ಅವರಿಗೆ ಕಾಣೋದೇನು? ಕಷ್ಟ ಕೋಟಲೆ ಸುಲಿಗೆಗಳ ರಾಶಿ ರಾಶಿ. ಅವರೆಲ್ಲ ಕಣ್ತೆರೆದು 'ನಮ್ಮೆಲ್ಲ ಕಷ್ಟ ಕೋಟಲೆಗಳೆಲ್ಲ ಯಾಕೆ?" ಎಂದು ಕಿರುಚಿದರೆ ಏನಾಗಬಹುದು. ಅವರ ಕಿರುಚಿರುವ ಬಾಯನ್ನು ಮುಚ್ಚಿಸುವುದಕ್ಕೆ ವ್ಯವಸ್ಥೆ ಸಾವಿರ ಪಾಯಿಂಟ್ ಪ್ರೋಗ್ರಾಂ ಕೊಡಬಹುದು.

"ಇನ್ನೂ ಮುಂದೆ ಹೋಗಿ ಉಳಿದಜಾತಿ ಬಡವರೂ ಕಣ್ತೆರೆದು ಬಡವ ಬಡವರೆಲ್ಲ ಯಾಕ ಜಾತಿ ಭೇದ ಎಂದುಕೊಂಡು ದಲಿತರೊಟ್ಟಿಗೆ ಸೇರಿಕೊಂಡು ಎಲ್ಲಾ ಸೇರಿ 'ನಮ್ಮೆಲ್ಲ ಕಷ್ಟ ಯಾಕೆ?' ಎಂದು ಕಿರುಚಿದರೆ ಏನಾಗಬಹುದು? ಅವರೆಲ್ಲರ ಕಿರುಚಿರೊ ಬಾಯನ್ನು ಮುಚ್ಚಿಸುವುದಕ್ಕೆ ವ್ಯವಸ್ಥೆ ಹತ್ತು ಸಾವಿರ ಪಾಯಿಂಟ್ ಪ್ರೋಗ್ರಾಂ ಕೊಡಬಹುದು. ಆಗ ಈ ದಲಿತರು ಆ ದಲಿತೇತರ ಬಡಬಗ್ಗರೂ ಸೇರಿ 'ಎಲ ಎಲಾ ಎತ್ತಗನೋಡಿದರೂ ಇರೋರು ನಾವೇನೆ. ನಾವೇನೆ ಯಾಕೆ ರಾಜ್ಯಭಾರ ಮಾಡಬಾರದು ಎಂದು ನಿಶ್ಚಯಿಸಿ ಪ್ರಯತ್ನಿಸಿ ಅಧಿಕಾರಕ್ಕೆ ಬಂದರೆ ಅವರು ಎಷ್ಟು ಪಾಯಿಂಟ್ ಪ್ರೋಗ್ರಾಂ ಹಾಕಬಹುದು? ಒಂದು ಕೋಟಿ? ಎರಡು ಕೋಟಿ? ಬಹುಶಃ ಇದಕ್ಕೂ ಹೆಚ್ಚಾಗಿ. ಅದಕ್ಕಾಗಿ ನಾವು ಎಷ್ಟು ಪಾಯಿಂಟ್ ಪ್ರೋಗ್ರಾಂ ಬೇಕಾಗಿದೆ ಎಂಬುದನ್ನು ಕಣ್ತೆರೆದಿರುವ ನಾವು ನಿಶ್ಚಯಿಸಬೇಕಾಗಿದೆ ಹಾಗೂ ಕಣ್ತೆರೆದಿರುವ ನಾವು ಉಳಿದವರ ಕಣ್ಣು ತೆರೆಸುವ ಕೆಲಸ ಮಾಡುವುದು ನಾವು ಇಡಬೇಕಾದ ಮೊದಲ ಹೆಜ್ಜೆ ಆಗಿದೆ."

ಐದು ಗಂಟೆಗಳ ಸುದೀರ್ಘ ಕಾಲದಲ್ಲಿ ನಡೆದ ಈ ದಲಿತ 'ವಿಚಾರ ಸಂಕಿರಣ'ದಲ್ಲಿ ಸಾವಿರಾರು ಜನ ದಲಿತ ಯುವಕರೂ, ರೈತರೂ, ಮಹಿಳೆಯರೂ ಭಾಗವಹಿಸಿದ್ದರು. ಸಾವಿರಾರು ವರ್ಷಗಳ ಕಪ್ಪುತೆರೆ ಸರಿದು ಬೆಳಕು ಕಾಣಬಹುದೇನೋ ಅನ್ನುವ ಕಾತರ ಎಲ್ಲರ ಮುಖದ ಮೇಲೂ ಇತ್ತು.

**ರಕ್ತವೇ ಇಂಕು**

ಸಮ್ಮೇಳನದ ಎರಡನೇ ದಿನದ ಕಾರ್ಯಕ್ರಮ "ದಲಿತ ಕವಿ ಸಮ್ಮೇಳನ"ದೊಂದಿಗೆ ಪ್ರಾರಂಭವಾಯಿತು. ಕವಿಗೋಷ್ಠಿಯಲ್ಲಿ ಸರ್ವಶ್ರೀ ಇಂದೂಧರ ಹೊನ್ನಾಪುರ, ರಾಮದೇವ ರಾಕೆ, ಸಿದ್ಧಲಿಂಗಯ್ಯ ಎಚ್. ಗೋವಿಂದಯ್ಯ, ಶಿವಮಲ್ಲ ದೇವನೂರ, ಬಾನಂದೂರು ಕೆಂಪಯ್ಯ, ಪರಮಶಿವ ನಡುಬೆಟ್ಟ, ರುದ್ರಪ್ಪ ಹನಗವಾಡಿ, ಜನಾರ್ಧನ ಬೆಂಗಳೂರು, ನಾಗರಾಜ, ಕೆ. ರಾಮಯ್ಯ, ಎಸ್. ಆರ್. ಪರಶುರಾಮ, ಶ್ರೀಧರ ಕಲಿವೀರ ಇವರುಗಳು ಭಾಗವಹಿಸಿದ್ದರು. ಶ್ರೀ ಕೆ. ನ. ಶಿವತೀರ್ಥನ್ ಅಧ್ಯಕ್ಷತೆ ವಹಿಸಿದ್ದರು.

ಶತಶತಮಾನಗಳಿಂದ ಗಾಯ ಇದ್ದರೂ ಇದೆ ಅಂತ ಹೇಳಲು ಅಕ್ಷರ ಗೊತ್ತಿರಲಿಲ್ಲ. ನೋವಾಗಿದ್ದನ್ನು ಚಾರಿತ್ರಿಕ ದೃಷ್ಟಿಯಿಂದ, ಸತ್ಯದ ಆವರಣದಲ್ಲಿ ಪ್ರಾಮಾಣಿಕ ಅಭಿವ್ಯಕ್ತಿಯೊಂದಿಗೆ ಹೇಳುವ ಅವಕಾಶ ಈಗ ಒದಗಿದೆ. ಇಂಥ ಅಭಿವ್ಯಕ್ತಿ ದಲಿತ ಕವಿಗೋಷ್ಠಿಯಲ್ಲಿ ಏಕತಾನವಾಗಿ ಪ್ರತಿಧ್ವನಿಸಿತು. ದಲಿತಯಾತನೆ, ಸಮಾಜದ ಪ್ರೇತ ಸ್ವರೂಪ ಅನೇಕ ಕವನಗಳ ಸಾಲುಸಾಲುಗಳಲ್ಲಿ ಸುಳಿದಾಡಿತು. ಇಲ್ಲಿನ ಎಲ್ಲ ದಲಿತ ಕವಿಗಳು ತಮ್ಮ ತಮ್ಮ ರಕ್ತವನ್ನೇ ಇಂಕು ಮಾಡಿಕೊಂಡು ಪ್ರಾಮಾಣಿಕ ಕಾವ್ಯವನ್ನು ಸೃಷ್ಟಿಸಿದ ಆಶ್ಚರ್ಯ ಈ ಕವಿ ಸಮ್ಮೇಳನದಲ್ಲಿ ಕಂಡು ಬಂದ ಅಂಶ.

**ಮೋಸದ ಕೊನೆಗಾಲ**

ಅಧ್ಯಕ್ಷತೆ ವಹಿಸಿದ್ದ ಶ್ರೀ ಕೆ. ನ. ಶಿವತೀರ್ಥನ್‌ರವರು ಕವಿಗೋಷ್ಠಿಯ ಬಗ್ಗೆ ಮಾತನಾಡುತ್ತ "ಇಲ್ಲಿನ ಎಲ್ಲ ಕವಿಗಳ ಧ್ವನಿಯು ಒಂದೇ ಆಗಿವೆ. ಶತ ಶತಮಾನಗಳ ಕ್ರೌರ್ಯಕ್ಕೆ ತುತ್ತಾದ ಒಂದೇ ಒಂದು ಉಸುರಿದೆ ಇಲ್ಲಿನ ಕವನಗಳಲ್ಲಿ. ಇದನ್ನು ನಾವು ನೋಡಿದಾಗ ಇದು ನಮ್ಮೆಲ್ಲರ ಎಚ್ಚೆತ್ತ ದನಿ ಎನ್ನುವುದರಲ್ಲಿ ಸಂದೇಹವಿಲ್ಲ. ಈ ಕೂಗೇ ಕನ್ನಡ ಸಾಹಿತ್ಯಕ್ಕೆ ಹೊಸ ತಿರುವನ್ನೂ, ಆಯಾಮವನ್ನೂ ಕೊಡುತ್ತದೆ" ಎಂದರು. ಮುಂದುವರೆದ ಅವರು "ಇತಿಹಾಸದ ಗತಿಯಲ್ಲಿ ವಿಚಾರ ಮತ್ತು ಕ್ರಿಯೆಯ ನಡವೆ ದೊಡ್ಡ ಕಂದಕವಿದ್ದುದರಿಂದ ಯಾವ ತತ್ವವೂ ಪ್ರಯೋಜನಕ್ಕೆ ಬರಲಿಲ್ಲ. ಈಗ ಅಂತಹ ಮೋಸ ನಡೆಯಲಾರದು. ಯಾಕೆಂದರೆ ಯಾರು ಏನನ್ನು ಮಾಡಬೇಕೋ ಅವರಿಂದಲೇ ಅದು ಪ್ರಾರಂಭವಾಗಿದೆ. ಇದಕ್ಕೆ ಇಲ್ಲಿನ ಈ ಸಮ್ಮೇಳನವೇ ಸಾಕ್ಷಿ ನುಡಿಯುತ್ತಿದೆ" ಎಂದು ಹೇಳಿ ಈಗ ನಾವೆಲ್ಲ ಹೊಸ ತಿರುವಿನಲ್ಲಿದ್ದೇವೆ. ಬರೀ ನೋವಿನ ಮುದ್ದೆಗಳಾದ ನಮ್ಮ ಧಮನಿಗಳಲ್ಲಿ ಈಗ ರೊಚ್ಚು ಕಿಚ್ಚು ಮೂಡಿದೆ. ಇದನ್ನು ಶಿಥಿಲಗೊಳಿಸದಂತೆ ಜವಾಬ್ದಾರಿಯಿಂದ ಕಾಯುವ, ಹಿಡಿದ ಕಾರ್ಯವನ್ನು ಮಾಡುವ ಹೊಣೆ ನಮ್ಮೆಲ್ಲರದಾಗಿದೆ" ಎಂದರು.

ಸಮ್ಮೇಳನದ ಕಡೆದು ಕಾರ್ಯಕ್ರಮವಾಗಿ 19ರ ಸಂಜೆ ದಲಿತ ಸಮಸ್ಯೆಗಳ ಮೇಲೆ ವಿಚಾರ ವಿನಿಮಯಗಳಾದಾವು. ಎಲ್ಲರೂ ತಮ್ಮ ತಮ್ಮ ಸಮಸ್ಯೆಗಳನ್ನು ಮುಂದಿಟ್ಟು ಅದಕ್ಕೆ ಮಾಡಬೇಕಾದ ಚಿಕಿತ್ಸೆಯ ಬಗ್ಗೆ ಚರ್ಚೆ ಮಾಡಿದರು. ದಲಿತರ ಎಲ್ಲಾ ಬಗೆಯ ಸಮಸ್ಯೆಗಳ ಚರ್ಚೆ ಅಂದಿನ ಕಾರ್ಯಕ್ರಮವಾಗಿತ್ತು. ದಲಿತ ಸಮಸ್ಯೆಗಳನ್ನು ಕುರಿತು ಮತ್ತು ಅವುಗಳ ಪರಿಹಾರೋಪಾಯಗಳನ್ನು ಕುರಿತು ಸರ್ವಶ್ರೀ ಇಂದೂಧರ ಹೊನ್ನಾಪುರ, ರುದ್ರಪ್ಪ ಹನಗವಾಡಿ, ರಾಮದೇವ ರಾಕೆ, ತಿಪ್ಪಣ್ಣ, ಸಿದ್ದಲಿಂಗಯ್ಯ, ಬಿ. ಕೃಷ್ಣಪ್ಪ ಮತ್ತು ರಾಜು ಇವರುಗಳು ಮಾತನಾಡಿದರು. ಡಾ|| ತಿಪ್ಪೇಸ್ವಾಮಿ ಅಧ್ಯಕ್ಷತೆ ವಹಿಸಿದ್ದರು.

# ‘ಜಾತಿ ವಿನಾಶ’

## 3

ಮೂಲ : ಅಂಬೇಡ್ಕರ್
ಅನುವಾದ : ಮು. ನ. ಜವರಯ್ಯ

**ನಾಯಕನಿಂದಲೇ ನಾಮಾವಶೇಷ**

ಸಮಾಜ ಸುಧಾರಣೆಯಂಥ ಮಹತ್ವದ ಕಾರ್ಯವನ್ನು ಬಲವಾಗಿ ನಂಬಿದ್ದ ಸಮಾಜ ಸುಧಾರಣಾ ಪಕ್ಷದ ಜನ ಅದನ್ನು ಮನೆತನದ ಮೇಲಿನ ವೈರ, ರಾಜಕೀಯ ಸುಧಾರಣೆಯೇ ಮುಖ್ಯವೆಂದು ಕೂಗಿದ ಜನ ಅದಕ್ಕೆ ದನಿ ಕೂಡಿಸದೇ ಹೋದ ಸಮಾಜ ಸುಧಾರಣಾ ಪಕ್ಷದವರ ಮೇಲಿನ ವೈರ—ಈ ಎರಡು ಗುಂಪಿನ ನಡುವೆ ಬೆಳೆದ ಈ ಜೀವಂತ ವೈರ ಕೊನೆಗೆ ಸಮಗ್ರ ಸಮಾಜದ ಹಿತದೃಷ್ಟಿಯಲ್ಲಿ ಸಂಪೂರ್ಣ ಉದಾಸೀನರಾಗಿಯೇ ಮೆರೆದರು. ಆಮೇಲೆ ಸಮಾಜಸುಧಾರಣಾ ಕಾರ್ಯಕ್ಕಾಗಿ ರೂಪಿಸಲಾಗಿದ್ದಂಥ ಧ್ಯೇಯ ಧೋರಣೆಗಳನ್ನೆಲ್ಲಾ ಕಾಂಗ್ರೆಸ್ ಪಕ್ಷದ ಧುರೀಣರೆನಿಸಿದ್ದ ದಿ|| ಬಾಲಗಂಗಾಧರ ತಿಲಕರ ನೇತೃತ್ವದಲ್ಲಿ ಹಿಂತೆಗೆದುಕೊಳ್ಳಲಾಯಿತು. ಈ ಎರಡು ಗುಂಪಿನ ನಡುವೆ ಬೆಳೆದ ವೈರ ಇನ್ನೂ ಮುಂದೆಹೋಗಿ ಸಮಾಜ ಸುಧಾರಣಾ ಪಕ್ಷದವರು ತಮ್ಮ ಧ್ಯೇಯದಂತೆ ಸಾಮಾಜಿಕ ಸಮ್ಮೇಳನಗಳನ್ನು ಕರೆದಾಗ, ಅವರು ನಿರ್ಮಿಸಿದ ಸಮ್ಮೇಳನದ ವೇದಿಕೆಗಳನ್ನು ಸುಟ್ಟು ಭಸ್ಮ ಮಾಡುವಂಥ ಬೆದರಿಕೆಗಳು ಅದರ ವಿರೋಧಿ ಗುಂಪಿನಿಂದಲೇ ಬರತೊಡಗಿದವು. ಕಡೆಗೆ ಇವೆರಡರ ಗತಿ ಏನಾಯಿತು, ರಾಜಕೀಯ ಸುಧಾರಣಾ ಪಕ್ಷ ಗೆದ್ದು ಅಧಿಕಾರದ ಗದ್ದುಗೆಯ ಮೇಲೆ ಮೆರೆಯುವಂತಾಯಿತು. ಇದೇ ಹೊತ್ತಿಗೆ ಸರಿಯಾಗಿ ಸಮಾಜ ಸುಧಾರಣಾ ಪಕ್ಷದ ಸೊಲ್ಲು ತೇಲುಸಿರು ಮೇಲುಸಿರಿನ ಸ್ಥಿತಿಗೆ ಬಂತು. ಮತ್ತೆ ಅದು ಈ ಭೂಮಿಯ ಮೇಲೆ ತಲೆ ಎತ್ತುವುದೇ ದುಸ್ತರವಾಯಿತು. ೧೮೯೨ ರಲ್ಲಿ ಅಹಮದಾಬಾದಿನಲ್ಲಿ ನಡೆದ ಕಾಂಗ್ರೆಸ್ಸಿನ ಎಂಟನೇ ವಾರ್ಷಿಕ ಅಧಿವೇಶನದಲ್ಲಿ ಶ್ರೀ W. C. ಬ್ಯಾನರ್ಜಿಯವರು ಮಾಡಿದ ಭಾಷಣವಂತೂ, ಈ ಸಮಾಜ ಸುಧಾರಣಾ ಪಕ್ಷದ ಅಕಾಲ ಸಾವಿನ ಕೋಪಗೀತೆಯಾಗಿಯೇ ಪರಿಣಮಿಸಿತು. ಕಾಂಗ್ರೆಸ್ಸಿನ ಈ ನಡತೆ ಇಂದಿಗಾದರೂ ಬದಲಾಗಿದೆಯೆ? ಖಂಡಿತಾ ಇಲ್ಲ. ಶ್ರೀ ಬ್ಯಾನರ್ಜಿಯವರು ಹೇಳುತ್ತಾರೆ : ನಮ್ಮ ಸಾಮಾಜಿಕ ವ್ಯವಸ್ಥೆಯನ್ನು ಸುಧಾರಿಸುವವರೆಗೆ ರಾಜಕೀಯ ಸುಧಾರಣೆಗೆ ನಾವು ಅರ್ಹರಲ್ಲವೆಂದು ಹೇಳುವವರಿಗೆ ನಿಜವಾಗಿಯೂ ಸಹನೆ ಅನ್ನುವುದೇ ಇಲ್ಲವೆಂದು ಹೇಳುವವರಲ್ಲಿ ನಾನೂ ಒಬ್ಬ. ಈ ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಪರಸ್ಪರ ಏನು ಸಂಬಂಧವೆಂಬುದೇ ನನಗೆ ಅರ್ಥವಾಗುತ್ತಿಲ್ಲ. ನನ್ನ ಮೊದಲ ಪ್ರಶ್ನೆಯೆಂದರೆ; ರಾಜಕೀಯ ಸುಧಾರಣೆಗೆ ನಾನೇಕೆ ಅನರ್ಹರು? ನಮ್ಮ ವಿಧವೆಯರು ಮತ್ತೆ ಮದುವೆ ಆಗುವುದನ್ನು ನಾವು ಒಪ್ಪುವುದಿಲ್ಲವೆಂತಲೆ, ಅಥವಾ ಅನ್ಯ ಸಮಾಜಗಳಿಗಿಂತ ನಮ್ಮ ಸಮಾಜದಲ್ಲಿ ನಮ್ಮ ಹೆಣ್ಣುಮಕ್ಕಳು ಬಹಳ ಚಿಕ್ಕವಯಸ್ಸಿನಲ್ಲೇ ಮದುವೆ ಆಗಿಬಿಡುತ್ತಾರೆ ಎಂತಲೆ, ಅಥವಾ ನಮ್ಮ ಹೆಂಡತಿಯರು ಸದಾ ನಮ್ಮೊಡನೆ ನಮ್ಮ ಗೆಳೆಯರ ಮನೆಗಳಿಗೆ ಸುತ್ತುವುದಿಲ್ಲವೆಂತಲೆ, ಅಥವಾ ನಮ್ಮ ಹೆಣ್ಣು ಮಕ್ಕಳನ್ನು ನಾವು ಆಕ್ಸ್‌ಫರ್ಡಿಗೊ, ಕೇಂಬ್ರಿಡ್ಜಿಗೊ ಕಳುಹಿಸುವುದಿಲ್ಲವೆಂತಲೆ? ಇಲ್ಲವಾದರೆ ರಾಜಕೀಯ ಸುಧಾರಣೆಗೆ ನಾವೇಕೆ ಅನರ್ಹರು? (ಸಭೆಗೆ ಸಭೆಯೆ ಹರ್ಷಘೋಷ ಮೊಳಗಿತು)

**ಸಾಮಾಜಿಕ ಸಂಕಟ ಬ್ಯಾನರ್ಜಿಯವರಿಗಿಲ್ಲ**

ರಾಜಕೀಯ ಸುಧಾರಣೆಯ ಬಗೆಗೆ ಶ್ರೀಯುತ ಬ್ಯಾನರ್ಜಿಯವರ ಮಾತುಗಳನ್ನೇ ಯಥಾವತ್ತಾಗಿ ಇಲ್ಲಿ ಉಲ್ಲೇಖಿಸಿದ್ದೇನೆ. ಶ್ರೀ ಬ್ಯಾನರ್ಜಿಯವರು ಈ ಭಾಷಣ ಮಾಡಿದಾಗ, ರಾಜಕೀಯ ಕಾಂಗ್ರೆಸ್ ಪಕ್ಷದವರಿಗೆ ಇದರಂಥ ಜೀವಂತ ಪ್ರೇರಣೆ ಇನ್ನೊಂದರಲ್ಲಿಲ್ಲ. ಆದರೆ ಸಮಾಜ ಸುಧಾರಣೆಯಂಥ ಒಂದು ಮಹತ್ವ ಪೂರ್ಣ ಸಮಸ್ಯೆಯ ಬಗೆಗೆ ಕಿಂಚಿತ್ತಾದರೂ ಅರಿವುಳ್ಳ ಕೆಲವರಾದರೂ ಪ್ರಶ್ನಿಸಬಹುದು "ಹಾಗಾದರೆ ಬ್ಯಾನರ್ಜಿಯವರ ವಾದವೆ ಕೊನೆಯ ಮಾತೇನು? ಸಾಮಾಜಿಕ ಸಮಸ್ಯೆಯನ್ನು ನಿರ್ದಾಕ್ಷಿಣ್ಯವಾಗಿ ಕಡೆಗಣಿಸಿದ ನಮ್ಮ ರಾಜಕೀಯ ಕಾಂಗ್ರೆಸ್ಸಿಗರಿಗೆ ಬ್ಯಾನರ್ಜಿಯವರ ಭಾಷಣ ಪ್ರೇರಣೆಯಾಗಬಹುದೆ? ರಾಜಕೀಯ ಸಮಸ್ಯೆಯ ಮುಂದೆ ಸಾಮಾಜಿಕ ಸಮಸ್ಯೆ ತೀರಾ ಕ್ಷುಲ್ಲಕವಾದುದು ಎಂಬುದು ಇದರಿಂದ ಸಾದರಪಡುವುದಿಲ್ಲವೆ?" ಇದು ಹೀಗೆಯೇ ಇರಲಿ ಈಗ ಈ ಸಮಸ್ಯೆಯ ಇನ್ನೊಂದು ಮುಖವನ್ನು ಪರಿಶೀಲಿಸಿದಾಗ ಇದರ ಪೂರ್ಣ ಅರಿವಾಗಬಹುದು. ಈ ಸಮಾಜದಲ್ಲಿ ಅಸ್ಪೃಶ್ಯರೆನಿಸಿದ ಜನರನ್ನು ನಡೆಸಿಕೊಳ್ಳುತ್ತಿರುವ ರೀತಿಯನ್ನು ಇಲ್ಲಿ ಉದಾಹರಿಸಬೇಕಾದುದರ ಔಚಿತ್ಯವಿದೆ.

**ಕೋಳಿ ಕೇಳಿ ಮೆಣಸರೆದಂತಾಯಿತು !**

ಪೇಶ್ವೆಗಳ ಆಳ್ವಿಕೆಯ ಕಾಲದ ಮರಾಠ ರಾಜ್ಯದಲ್ಲಿ ಅಸ್ಪೃಶ್ಯರೆನಿಸಿದ ಜನರು ಸಾರ್ವಜನಿಕ ಬೀದಿಗಳಲ್ಲಿ ತಿರುಗಾಡುವಂತಿರಲಿಲ್ಲ. ಏಕೆಂದರೆ ಯಾವ ಬ್ರಾಹ್ಮಣನಾದರೂ ಅದೇ ಹಾದಿಯಲ್ಲಿ ಬಂದುಬಿಟ್ಟರೆ ಆ ಅಸ್ಪೃಶ್ಯನ ನೆರಳಿನಿಂದಾಗಿ ಆ ಬ್ರಾಹ್ಮಣ ಮಹಾಶಯ ಮೈಲಿಗೆಯಾಗಿಬಿಡುತ್ತಿದ್ದನಂತೆ. ಈ ಅಚಾತುರ್ಯವನ್ನು ತಪ್ಪಿಸಲು ಅಸ್ಪೃಶ್ಯನೆನಿಸಿದವನು ಮುಂಗೈಗಾಗಲಿ ಕೊರಳಿಗಾಗಲಿ ಒಂದು ಕಪ್ಪುದಾರವನ್ನು ಕಟ್ಟಿಕೊಳ್ಳಬೇಕಾಗಿತ್ತು. ಕಪ್ಪು ಶಾಪದ ಸಂಕೇತ ಎಂಬುದು ಪ್ರಚಲಿತವಿತ್ತು. ಪೇಶ್ವೆಗಳ ರಾಜಧಾನಿಯಾಗಿದ್ದಂಥ ಪೂನಾದಲ್ಲಿ ಅಸ್ಪೃಶ್ಯನೆನಿಸಿದ ವ್ಯಕ್ತಿ ಸೊಂಟದ ಮೇಲೊಂದು ಮಕ್ಕರಿ ಮತ್ತು ಕೈಯಲ್ಲೊಂದು ಪೊರಕೆ ಹಿಡಿದು ತಾನು ಹೆಜ್ಜೆ ಇಟ್ಟು ನಡೆದ ನೆಲವನ್ನೆಲ್ಲಾ ಅವನು ಗುಡಿಸಿಕೊಂಡು ಹೋಗಬೇಕಾಗಿತ್ತು. ಏಕೆಂದರೆ ಆ ಹಾದಿಯಲ್ಲಿ ಬ್ರಾಹ್ಮಣರೇನಾದರೂ ತಿರುಗಾಡಿದರೆ ಅವರು ಮೈಲಿಗೆ ಆಗಿಬಿಡುತ್ತಾರೆ ಎಂದು ಅದೇ ಮಹಾರಾಜಧಾನಿಯಲ್ಲಿ ಅಸ್ಪೃಶ್ಯನೆನಿಸಿದವನು ಕತ್ತಿಗೊಂದು ಮಣ್ಣಿನ ಮೊಗೆ ನೇತುಹಾಕಿಕೊಂಡು ತನಗೆ ಉಗುಳಬೇಕೆನಿಸಿದಾಗ, ಅದನ್ನೆಲ್ಲಾ ಆ ಮೊಗೆಗೆ ಉಗಿದು ತುಂಬಿಕೊಂಡು ತಿರುಗಾಡಬೇಕಾಗಿತ್ತು. ಏಕೆಂದರೆ, ತಿಳಿಯದೆ ಯಾವ ಬ್ರಾಹ್ಮಣನಾದರೂ ಆ ಉಗುಳು ತುಳಿದುಬಿಟ್ಟರೆ ಅವನು ಮೈಲಿಗೆಯಾಗಿಬಿಡುತ್ತಿದ್ದನಂತೆ ಇದರೊಡನೆ ಇತ್ತೀಚಿನ ಒಂದು ಉದಾಹರಣೆಯನ್ನೇ ಕೇಳಿ : ಮಧ್ಯ ಭಾರತದಲ್ಲಿ ಬಲಯ (ಹೊಲೆಯ) ರು ಎಂಬ ಅಸ್ಪೃಶ್ಯ ಜನರನ್ನು ಅಲ್ಲಿನ ಸವರ್ಣ ಹಿಂದುಗಳು ನಡೆಸಿಕೊಳ್ಳುತ್ತಿದ್ದ ಕ್ರೂರ ಹಿಂಸೆಯನ್ನು ನೋಡಿ ೧೯೨೮ರ ಜನವರಿ ೪ರ 'ಟೈಮ್ಸ್ ಆಫ್ ಇಂಡಿಯಾ' ಪತ್ರಿಕೆಯನ್ನು ತೆರೆದುನೋಡಿ ಆ ಪತ್ರಿಕೆಯ ವರದಿಗಾರ ಹೇಳುವಂತೆ : ಮೇಲು ಜಾತಿಯ ಹಿಂದುಗಳೆನಿಸಿದ ಕಲೂಟರು, ರಜಪೂತರು ಮತ್ತು ಬ್ರಾಹ್ಮಣರು (ಇಂದೂರು ರಾಜ್ಯದ ಇಂದೂರು

(ಐದನೆ ಪುಟ ನೋಡಿ)

## ‘ ಜಾತಿ ವಿನಾಶ ’

( ನಾಲ್ಕನೆ ಪುಟದಿಂದ )

ಜಿಲ್ಲೆಗೆ ಸೇರಿದ) ಕನೇರಿಯಾ, ಬಿಚೋಲಿ—ಹಾಪ್ಸೀ ಬಿಚೋಲಿ—ಮರ್ದಾನ ಮುಂತಾದ ಸುಮಾರು ಹದಿನೈದು ಹಳ್ಳಿಗಳ ಪಟೇಲರು ಮತ್ತು ಪಟನಾರಿಗಳೆಲ್ಲಾ ಸೇರಿ, ಆಯಾ ಹಳ್ಳಿಗಳ ಬಲಯರಿಗೆ ಅವರು ಆಜ್ಞಾಪಿಸಿದ್ದಂತೆ, ಬಲಯರೇ ಬದುಕಬೇಕೆಂಬ ಆಸೆಯಿದ್ದರೆ ಕೆಳಕಂಡಂಥ ಶಾಸನಗಳನ್ನು ಚಾಚು ತಪ್ಪದೆ ಅವರು ಪರಿಪಾಲಿಸಬೇಕಾಗಿತ್ತು.

೧. ಬಲಯರು ಚಿನ್ನದ ಸರಗಳನ್ನಾಗಲಿ ಇತರ ಆಭರಣಗಳನ್ನಾಗಲಿ ಧರಿಸಬಾರದು.

೨. ಬಲಯರು ಕಲಾಪತ್ತಿನ ಅಂಚುಳ್ಳ ಧೋತಿಗಳನ್ನು ಧರಿಸಬಾರದು.

೩. ಬಲಯರು ಹಿಂದುಗಳ ಸಾವಿನ ಸುದ್ದಿಯನ್ನು ಅವರು ಬಾಯಿಲೆ ಬಿದ್ದಾಗಲೇ ಅವರ ಸಂಬಂಧಿತರು ಎಷ್ಟೇ ದೂರದಲ್ಲಿದ್ದರೂ ಹೋಗಿ ಮುಟ್ಟಿಸಬೇಕಾಗಿತ್ತು.

೪. ಹಿಂದುಗಳ ಮದುವೆ ಮುಂತಾದ ಮೆರವಣಿಗೆಯಮುಂದೆ ಬಲಯರು ವಾದ್ಯ ಬಾರಿಸಬೇಕಿತ್ತು.

೫. ಬಲಯರ ಹೆಂಗಸರು ಚಿನ್ನ–ಬೆಳ್ಳಿಯ ಒಡವೆಗಳನ್ನಾಗಲಿ ಬೆಲೆ ಬಾಳುವ ಸೀರೆ ರವಿಕೆಗಳನ್ನಾಗಲಿ ಉಡಬಾರದು.

೬. ಹಿಂದೂ ಸ್ತ್ರೀಯರ ಹೆರಿಗೆ ಮುಂತಾದ ಸೂತಕಗಳ ಮತ್ತು ಕೆಟ್ಟ ಬಟ್ಟೆಗಳನ್ನು ಬಲಯರ ಹೆಂಗಸರೇ ಶುಚಿ ಮಾಡಬೇಕು.

೭. ಅವರು ಮಾಡುವ ಈ ಸೇವೆಗಳಿಗೆ ಬಲಯರು ಯಾವ ಪ್ರತಿಫಲವನ್ನೂ ಕೇಳಬಾರದು. ಹಿಂದೂವಾದವನು ಏನು ಕೊಡುವನೋ ಅದಕ್ಕೆ ಬಲಯರು ಕೈನೀಡಬೇಕು.

೮. ಒಂದು ವೇಳೆ ಈ ಮೇಲೆ ಹೇಳಿರುವ ಕಟ್ಟಳೆಗಳನ್ನು ಮೀರಿದರೆ, ಅಂಥವರನ್ನು ನಿರ್ದಾಕ್ಷಿಣ್ಯವಾಗಿ ಊರಿಂದ ಬಹಿಷ್ಕರಿಸಲಾಗುವುದು. ಇದಕ್ಕೆ ಒಪ್ಪದಿದ್ದರೆ ಹಿಂದೂ ಶಾಸ್ತ್ರಗಳು ಕುಪಿತವಾಗಿ ಬಲಯರ ವಿರುದ್ಧ ಮತ್ತಷ್ಟು ಉಗ್ರ ಶಾಸನಗಳನ್ನೇ ಮಾಡಬೇಕಾಗುತ್ತದೆ. ಬಲಯರು ಊರಿನ ಬಾವಿಯಿಂದ ನೀರು ಸೇದಬಾರದು. ಅವರು ತಮ್ಮ ದನಕರುಗಳನ್ನು ಬಯಲಿಗೆ ಬಿಡಬಾರದು. ಬಲಯರು ಹಿಂದುಗಳಿಂದ ಭೂಮಿಯನ್ನು ಕೊಳ್ಳಬಾರದು ಒಂದು ವೇಳೆ ಬಲಯನ ಜಮೀನು ಹಿಂದೂಗಳ ಜಮೀನುಗಳ ನಡುವೆ ಇದ್ದರೆ ತನ್ನ ಜಮೀನಿಗೆ ಹೋಗಲು ಅವನಿಗೆ ದಾರಿಯಿಲ್ಲ. (ಏಕೆಂದರೆ ಬಲಯರು ತುಳಿದ ನೆಲವನ್ನು ಬ್ರಾಹ್ಮಣರು ತುಳಿಯುವಂತಿಲ್ಲ) ಆದ್ದರಿಂದ ಬಲಯನ ಜಮೀನಿನಲ್ಲಿ ಹಿಂದೂಗಳು ತಮ್ಮ ದನಕರುಗಳನ್ನು ಬಿಟ್ಟು ಮೇಯಿಸಿಕೊಳ್ಳಬಹುದು.

### ಅವರ ಜೀವ ರಕ್ಷಣೆಗೆ ಸರಕಾರವಿಲ್ಲ

ಇಂಥ ಅಮಾನುಷ ಸಂಪ್ರದಾಯಗಳ ವಿರುದ್ಧ ಬಲಯರು ದರ್ಬಾರಿಗೆ ದೂರು ಸಲ್ಲಿಸಿದರು. ಆದರೆ ಆ ಸಮಯಕ್ಕೆ ಯಾವ ಪರಿಹಾರವೂ ಅವರಿಗೆ ದೊರೆಯಲಿಲ್ಲ. ಈಗ ಮಾತ್ರ ಸವರ್ಣೀಯರ ತುಳಿತ ಇನ್ನೂ ಉಗ್ರವಾಯಿತು. ಜೀವ ಉಳಿಸಿಕೊಳ್ಳುವುದೂ ಕಷ್ಟವಾಯಿತು. ತಲೆ ತಲೆಮಾರುಗಳಿಂದಲೂ ಅವರ ತಾತ ಮುತ್ತಾತಂದಿರೆಲ್ಲಾ ಬದುಕಿ ಬಾಳಿದಂಥ ಮನೆಮಠಗಳನ್ನೆಲ್ಲಾ ಬಿಟ್ಟು ಈ ಹಿಂಸೆ ಬಲಾತ್ಕಾರಕ್ಕೆ ಹೆದರಿ ಓಡಿಹೋಗಬೇಕಾಯಿತು. ಕೊನೆಗೆ ಜೀವ ರಕ್ಷಣೆಗಾಗಿ ಆ ಪ್ರಾಂತ್ಯವನ್ನೇ ತೊರೆದರು. ಗ್ವಾಲಿಯರ್, ಭೂಪಾಲ್ ಮುಂತಾದ ರಾಜ್ಯಗಳಿಗೆ ಸೇರಿದ ಧಾರ್, ದೇವಾಸ್, ಮತ್ತು ಬಗ್ಲೀ ಮುಂತಾದ ಹಳ್ಳಿಗಳಿಗೆ ಬಂದು ಸೇರಿಕೊಂಡರು. ಇಲ್ಲಿ ಮತ್ತೆ ಮನೆ-ಮಠ ಕಟ್ಟಿಕೊಂಡಮೇಲೆ ಏನಾಯಿತು ಎಂಬುದು ಅಪ್ರಸ್ತುತ. ಹಾಗೆಯೆ ಕಳೆದ ವರ್ಷ, ಗುಜರಾತಿನ ಕವಿತಾ ಎಂಬ ಹಳ್ಳಿಯಲ್ಲಿ ನಡೆದ ಇನ್ನೊಂದು ಘಟನೆಯನ್ನು ಕೇಳಿ; ಕವಿತಾ ಹಳ್ಳಿಯ ಹಿಂದೂಗಳು ಅದೇ ಹಳ್ಳಿಯ ಅಸ್ಪೃಶ್ಯರಿಗೆ ಅಲ್ಲಿನ ಸರಕಾರಿ ಶಾಲೆಗೆ ಅವರ ಮಕ್ಕಳನ್ನು ಕಳುಹಿಸಬಾರದೆಂದು ಬೆದರಿಕೆ ಹಾಕಿದರು. ಅನಂತರ ಹಿಂದೂಗಳ ಈ ಧೋರಣೆಯ ವಿರುದ್ಧ ಅಸ್ಪೃಶ್ಯರು ತಮ್ಮ ಪೌರಹಕ್ಕು ಚಲಾಯಿಸುವ ಸಾಹಸಮಾಡಿ ಏನೇನು ಅನುಭವಿಸಿದರು ಎಂಬುದರ ವಿವರ ಇಲ್ಲಿ ಅನಗತ್ಯ. ಏಕೆಂದರೆ ಆಗಿರಬಹುದಾದ ಪರಿಣಾಮವನ್ನು ಊಹಿಸಿಕೊಳ್ಳಬಹುದು, ಕಷ್ಟದ ಕೆಲಸವೇನಲ್ಲ, ಗುಜರಾತ್ ರಾಜ್ಯದ ಅಹಮದಾಬಾದ್ ಜಿಲ್ಲೆಯ ಜುನ್ನು ಎಂಬ ಹಳ್ಳಿಯಲ್ಲಿ ನಡೆದ ಇನ್ನೊಂದು ಘಟನೆಯನ್ನಾದರೂ ನೋಡಿ; ೧೯೭೬ರ ನವೆಂಬರ್‌ನಲ್ಲಿ ನಡೆದ ಘಟನೆ. ಆರ್ಥಿಕವಾಗಿ ಸ್ವಲ್ಪ ನಿಶ್ಚಿಂತವಾಗಿದ್ದ ಈ ಹಳ್ಳಿಯ ಕೆಲವು ಅಸ್ಪೃಶ್ಯ ಕುಟುಂಬಗಳ ಹೆಂಗಸರು ಲೋಹದ ಪಾತ್ರೆಗಳಿಂದ ನೀರು ತೆಗೆದುಕೊಳ್ಳುತ್ತಿದ್ದರು. ಅಸ್ಪೃಶ್ಯ ಹೆಂಗಸರು ಲೋಹದ ಪಾತ್ರೆಗಳಿಂದ ನೀರು ತೆಗೆದುಕೊಳ್ಳುವುದರಿಂದ ತಮಗೆ ಅಪಮಾನವಾಯಿತೆಂದು ಕೆಲವು ಹಿಂದೂಗಳು ಆ ಹೆಂಗಸರ ಮೇಲೆ ಅಮಾನುಷವಾಗಿ ಹಲ್ಲೆ ನಡೆಸಿದರು.

* ಬಲೆಯರು = ಹೊಲೆಯರು

[ಸಶೇಷ]

---

**ವಂಶಪಾರಂಪರ್ಯ ಅಧಿಕಾರವನ್ನು ಜನ ಸಹಿಸುವುದಿಲ್ಲ ಎನ್ನುವುದನ್ನು ಆಡಳಿತದಲ್ಲಿರುವವರು ಅರ್ಥ ಮಾಡಿಕೊಳ್ಳದೆ ಹೋದರೆ ಆಗ ಈ ದೇಶವು ನಾಶವಾಗುತ್ತದೆ.**

—ಅಂಬೇಡ್ಕರ್

ಅಭಿನಂದನ್ ( ಕಾಳಭೈರಯ್ಯ )
ಅಂತಿಮ ಎಂ.ಎ.
ರಾಜ್ಯಶಾಸ್ತ್ರ ವಿಭಾಗ
ಮಾನಸಗಂಗೋತ್ರಿ, ಮೈಸೂರು–6.

## 'ಕೇರ್' ಕಳ್ಳರ ಅನಿರ್ಬಂದಿತ ಗೂಂಡಾಗಿರಿ

ಸರ್ಕಾರ [ಕೇರ್ ಫುಡ್ ಯೋಜನೆ] ಬಡ ಮಕ್ಕಳಿಗೆ ಹಾಲು, ಬ್ರೆಡ್ಡನ್ನು ಉಚಿತವಾಗಿ ಹಂಚುವ ವ್ಯವಸ್ಥೆ ಮಾಡಿರುವುದು ಸರಿಯಷ್ಟೆ. ಈ ವ್ಯವಸ್ಥೆಯಲ್ಲಿ ಹಾಲು, ಬ್ರೆಡ್ ಹಂಚುವ ಜವಾಬ್ದಾರಿ ವಹಿಸಿಕೊಂಡಿರುವ ವ್ಯವಸ್ಥಾಪಕರು ಮಕ್ಕಳಿಗೆ ಕೊಡಬೇಕಾಗಿರುವಷ್ಟು ಕೊಡದೆ ಮಿಗಿಸಿ ತಮ್ಮ ಮನೆಗೆ ಸಾಗಿಸುತ್ತಿದ್ದುದನ್ನು ಕಂಡುಹಿಡಿದು ಬಹಿರಂಗ ಪಡಿಸಿದುದಕ್ಕಾಗಿ, ಕಳ್ಳತನ ಹಿಡಿದ ಯುವಕರನ್ನು ಹಾಲು, ಬ್ರೆಡ್ ದೋಚುತ್ತಿದ್ದ ವ್ಯವಸ್ಥಾಪಕರು ಗೂಂಡಾಗಳಿಂದ ಹೊಡೆಸಿದ ಪ್ರಕರಣವೊಂದು ತಿಳಿದುಬಂದಿದೆ.

ಮೈಸೂರು, ರಾಜೇಂದ್ರನಗರದN.G.O'S. ಕಾಲನಿಯಲ್ಲಿರುವ 'ಭಾರತಿ ಶಿಕ್ಷಣ ಸಂಸ್ಥೆ'ಯ ಮುಖೇನ ಪುಟ್ಟೇಗೌಡ ಎಂಬುವರ ನೇತೃತ್ವದಲ್ಲಿ ಮೊಹಲ್ಲಾದ ಮಕ್ಕಳಿಗೆ ಹಾಲು, ಬ್ರೆಡ್ ಹಂಚುತ್ತಿದ್ದು, ಬಹುಪಾಲು ಬ್ರೆಡ್ ಮತ್ತು ಹಾಲು ದಿನವೂ ಪುಟ್ಟೇಗೌಡರ ಮನೆಗೆ ಸಾಗುತ್ತಿತ್ತು. ಇದನ್ನು ಅರಿತ ಅಲ್ಲಿನ ನಿವಾಸಿಗಳು ಸಂಬಂಧಪಟ್ಟ ಮೇಲಿನವರಿಗೆ ದೂರುಕೊಟ್ಟರೂ ಏನೂ ಪ್ರಯೋಜನವಾಗದೆ, ಕೊನೆಗೆ ಅಲ್ಲಿಯ 'ಯುವಕ ಸಂಘ'ಕ್ಕೆ ತಿಳಿಸಿದಾಗ ಸಂಘದ ಹುಡುಗರು ಇದನ್ನೆಲ್ಲಾ ಗಮನಿಸತೊಡಗಿದರು. 12-1-77 ರಾತ್ರಿ ಪುಟ್ಟೇಗೌಡರ ಮನೆಗೆ ಅವರ ಕಡೆಯ ಹುಡುಗನೇ ಬ್ರೆಡ್ ತೆಗೆದುಕೊಂಡು ಹೋಗುತ್ತಿದ್ದುದನ್ನು ಹಿಡಿದು-ಪುಟ್ಟೇಗೌಡರಿಗೆ ಹೀಗೆಲ್ಲಾ ಮಾಡುವುದು ಸರಿಯಲ್ಲ ಎಂದು ಹೇಳಿ, ಮುಂದೆ ಹೀಗೆ ಮಾಡಿದರೆ ತಕ್ಕವರಿಗೆ ತಿಳಿಸಬೇಕಾಗುತ್ತದೆ ಎಂದು ಎಚ್ಚರಿಕೆಕೊಟ್ಟು ಬಂದುದಾಗಿ 'ಯುವಕ' ಸಂಘದವರು ತಿಳಿಸಿದರು.

ಆದರೆ ಬೆಳಗಾದಾಗ ಹ್ಯಾಗೋ ಇದು ಪ್ರಚಾರವಾಗುತ್ತಾ ಮೊಹಲ್ಲಾದ ಎಲ್ಲರ ಕಿವಿಗೂ ಮುಟ್ಟತೊಡಗಿತು. ಇದು ಪುಟ್ಟೇಗೌಡರಿಗೆ ಸಹಿಸಲು ಸಾಧ್ಯವಾಗದೆ ತಾವು ಸದಸ್ಯರಾಗಿರುವ ಅದೇ ಮೊಹಲ್ಲಾದ 'ಒಕ್ಕಲಿಗರಸಂಘ'ದ ಅಧ್ಯಕ್ಷ ಕೃಷ್ಣಯ್ಯ,ಕಾರ್ಯದರ್ಶಿ S.N. ರಾಜು ಅವರೊಟ್ಟಿಗೆ ಕೂಡಿ 'ಯುವಕ ಸಂಘ'ದ ಹುಡುಗರೊಂದಿಗೆ ನೆಪಮಾತ್ರಕ್ಕೆ ರಾಜಿ ಮಾಡಿಕೊಂಡು, ಎರಡು ದಿನ ಬಿಟ್ಟು ಗೂಂಡಾಗಳಿಗೆ ಕುಡಿಸಿ 'ಯುವಕ ಸಂಘ'ದ ಹುಡುಗರಿಗೆ ಹೊಡೆಸಿದ್ದು, ಅದಕ್ಕೂ ಮೊದಲೇ ಯುವಕ ಸಂಘದವರೇ ಚಾಕು, ದೊಣ್ಣೆ, ಚೈನು ತೆಗೆದುಕೊಂಡು ಹೊಡೆಯಲು ಬಂದಿದ್ದರೆಂದು ಕಂಪ್ಲೈಂಟ್ ಕೊಟ್ಟದುದರಿಂದ ಹೊಡೆಸಿಕೊಂಡರೂ ಹೊಡೆದ ಅಪರಾದ ಹೊತ್ತು ಪೋಲೀಸ್ ಸ್ಟೇಷನ್‌ಗೆ ಹೋಗಬೇಕಾಗಿ ಬಂದುದನ್ನು ಯುವಕ ಸಂಘದ ಹುಡುಗರು ವಿಷಾದದಿಂದ ಹೇಳಿದರು.

ಪುಟ್ಟೇಗೌಡ ಮತ್ತು ಕೃಷ್ಣಯ್ಯನವರಿಗೆ ಬ್ರೆಡ್ ದೋಚುವಾಗ ಹಿಡಿದ ಅವಮಾನದ ಜೊತೆಗೆ 'ಯುವಕ ಸಂಘ'ದ ಅಧ್ಯಕ್ಷರಾಗಿರುವ ಮಂಟೇಲಿಂಗಯ್ಯನವರ ನೇತೃತ್ವದಲ್ಲಿ ಇದೆಲ್ಲ ನಡೆದು ಆತ ಹರಿಜನನಾಗಿರುವುದು ಅವರ ಕೋಪಕ್ಕೆ ಮತ್ತಷ್ಟು ಕಾರಣವಾಗಿದೆ. ಮೊಹಲ್ಲದಲ್ಲೆಲ್ಲ ಪುಂಡುತನಕ್ಕೆ ಹೆಸರಾಗಿರುವ ಇವರು ಮಂಟೇಲಿಂಗಯ್ಯ ಮತ್ತು ಅವರ ಸಂಗಡಿಗರಿಗೆ ಹೊಡೆಯಲು ಮತ್ತು ಹೊಡೆಸಲು ಸಮಯ ಕಾಯುತ್ತಿದ್ದಾರೆಂದೂ ತಿಳಿದುಬಂದಿದೆ.

---

## ಹರಿಜನ ಮಹಿಳೆಯ ಕೊಲೆ

[ಒಂದನೆ ಪುಟದಿಂದ]

ಬಾರದಿರಲು ಮೃತಳ ತಾಯಿ ಸೀತಮ್ಮನವರು ಪಿಲ್ಲಮುನೆಪ್ಪನ ಮನೆ ಹತ್ತಿರ ಬಂದು ನೋಡಿದಾಗ ಅವನ ಮನೆಗೆ ಬೀಗ ಹಾಕಿತ್ತೆಂದೂ, ಅಲ್ಲಿಗೆ ಬಂದ ಪಿಲ್ಲಮುನೆಪ್ಪನ ಭಾವ ರಾಮಚಂದ್ರ ಎಂಬುವನು ಸೀತಮ್ಮನಿಗೆ 'ಏನೇ ಇನಾರ್ಮೇಷನ್ ತಿಳಿಯಲು ಬಂದೆಯಾ ಎಂದು ಗದರಿಸಲು ವಾಪಸ್ಸಾದೆನೆಂದು ಸೀತಮ್ಮ ತಿಳಿಸಿರುವರು. ಮೂರನೆಯ ದಿನ ಪಿಲ್ಲಮುನೆಪ್ಪನನ್ನು ಸೀತಮ್ಮ ಕಂಡು ನನ್ನ ಮಗಳು ಎಲ್ಲಿ ಎಂದು ಕೇಳಲು ಅದಕ್ಕೆ ಅವನು 'ಅವಳಿಗೆ 150 ರೂಪಾಯಿ ಕೊಟ್ಟು ಕಳುಹಿಸಿದೆ ನೀನು ಹೋಗು' ಎಂದು ತಿಳಿಸಿದನೆಂದೂ ಮತ್ತು ಆಗ ಅವನ ಕೈಯಿ ಮತ್ತು ಮುಖ ಊದಿಕೊಂಡಿತ್ತೆಂದು ಸೀತಮ್ಮ ತಿಳಿಸಿರುವರು. ಚಿನ್ನಮ್ಮನು ತಮ್ಮ ನೆಂಟರ ಊರಿಗೆ ಹೋಗಿರಬೇಕೆಂದು ಸೀತಮ್ಮ ನಂಬಿಕೊಂಡಿದ್ದರು. ಆದರೆ ಬಾವಿಯಲ್ಲಿ ಚಿನ್ನಮ್ಮನ ಹೆಣ ತೇಲುತ್ತಿತ್ತು. ಮೃತಳ ಮುಖ ಜಜ್ಜಿ ರಕ್ತ ಕಾಣಿಸುತ್ತಿತ್ತು. ಎರಡೂ ಎದೆಗಳೂ ಗಾಯದಿಂದ ಕೂಡಿತ್ತು. ಮೃತಳ ಮೈಮೇಲೆ ಬಟ್ಟೆಯೂ ಇರಲಿಲ್ಲ.

ಬಡ ಹರಿಜನರಾದ ಮೃತಳಾದ ಚಿನ್ನಮ್ಮನ ತಂದೆತಾಯಿಗಳೂ, ಆ ಸುತ್ತಮುತ್ತಲಿನ ಬಡ ಹರಿಜನರೂ ದಿಕ್ಕುತೋಚದೆ ಅಸಹಾಯಕರಾಗಿರುವರು. ಕೌನ್ಸಿಲರ್ ಮಿಲ್ಟ್ರಿ ವೆಂಕಟರೆಡ್ಡಿ, ಪಿಲ್ಲಿಮುನೆಪ್ಪ ಮುಂತಾದ ಪಂಚಾಯ್ತಿದಾರರು ಕೂಡಿ ಈ ಕೊಲೆ ಮಾಡಿರಬೇಕೆಂದು ಶಂಕಿಸಲಾಗಿದೆ. ಆದರೂ ಇದುವರೆಗೂ ಸಂಬಂಧಪಟ್ಟ ಯಾರನ್ನೂ ಬಂಧಿಸಿಲ್ಲ ಮತ್ತು ಚಿಂತಾಮಣಿಯ ಸರ್ಕಾರಿ ಆಸ್ಪತ್ರೆ ಡಾಕ್ಟರ್ ಶ್ರೀ ಶಂಕರಪ್ಪನವರು ಲಂಚ ಪಡೆದು ಸುಳ್ಳು ಸರ್ಟಿಫಿಕೇಟು ಕೊಟ್ಟರುವರೆಂದು ಅಭಿಪ್ರಾಯವಿದೆ. ಕೌನ್ಸಿಲರ್ ವೆಂಕಟರೆಡ್ಡಿಯು ಮಹಾ ಪುಂಡನೆಂದೂ ಎಲ್ಲವನ್ನೂ ನುಂಗಿಹಾಕುವನೆಂದೂ ಪ್ರತೀತಿ ಇದೆ. ಇಂಥ ಪರಿಸ್ಥಿತಿಯಲ್ಲಿ ಕೊಲೆಗಾರರಿಗೆ ಶಿಕ್ಷೆ ಆಗುವುದೇ ?

---

## ಕೋಲಾರದಲ್ಲಿ ದಲಿತ ಯುವ ಸಂಘಟನೆ

ಭದ್ರಾವತಿಯ 'ದಲಿತ ಸಂಘರ್ಷ ಸಮಿತಿ' ಯು ಕರ್ನಾಟಕದ ದಲಿತ-ಲೇಖಕ ಮತ್ತು ಕಲಾವಿದರನ್ನು ಒಗ್ಗೂಡಿಸಿ ಪ್ರಥಮ ಸಮ್ಮೇಳನವನ್ನು ಭದ್ರಾವತಿಯಲ್ಲಿ ನಡೆಸಿತು. 76ರ ಡಿಸೆಂಬರ್ 18-19 ರಂದು ನಡೆದ ಈ ಸಮ್ಮೇಳನದ ನೆನಪು ಮಾಸುವುದರೊಳಗೇ ಕೋಲಾರದ ಗೆಳೆಯರು ದಲಿತ ಯುವ ಸಂಘಟನಾ ಸಮ್ಮೇಳನವನ್ನು ಕರೆದಿದ್ದಾರೆ.

ದಿನ ನಿತ್ಯ ನಾನಾ ರೀತಿಯಲ್ಲಿ ದಬ್ಬಾಳಿಕೆ, ಕೊಲೆ-ಸುಲಿಗೆಗೆ ತುತ್ತಾಗುತ್ತಿರುವ ತಮ್ಮ ಜನತೆಯ ಹೊಸ ಬದುಕಿನ ಆಯಾಮಕ್ಕಾಗಿ ದಲಿತ ಯುವಕರು ಶೋಷಕರ ವಿರುದ್ಧ ಸಿಡಿಯುತ್ತ ಅಲ್ಲಲ್ಲೆ ಅಣಿಯಾಗುತ್ತಿದ್ದಾರೆ.

ಫೆ. 6 ರಂದು ನಡೆಯುವ ಈ ಸಮ್ಮೇಳನಕ್ಕೆ ಕರ್ನಾಟಕದ ಎಲ್ಲ ಕಡೆಯಿಂದ ಬರಹಗಾರರು, ಕಲಾವಿದರು, ಯುವಕರು ಭಾಗವಹಿಸಲಿದ್ದಾರೆ. ದಿನನಿತ್ಯ ತಮ್ಮನ್ನೆಲ್ಲಾ ಸುಡುತ್ತಿರುವ ಸಮಸ್ಯೆಗಳ ಮೇಲೆ ವಿಚಾರವಿನಿಮಯಗಳಾಗುವುವು.

— ಸಂ.

ಸಂಪಾದಕ : ರಾಮದೇವ ರಾಕೆ, ಜೊತೆಗೆ : ಶಿವಾಜಿಗಣೇಶನ್, ಶಿವಮಲ್ಲ ದೇವನೂರು, ಪ್ರಕಾಶಕ : ಹೆಚ್. ಗೋವಿಂದಯ್ಯ
ವಿಳಾಸ : 2649/2 ಕೆ. ಜಿ. ಕೊಪ್ಪಲ್, ಮೈಸೂರು-9. ಮುದ್ರಣ : ಆಂದೋಲನ ಮುದ್ರಣ, ಮೈಸೂರು-9.